# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 507

ಸದಸ್ಯರ ಹೆಸರು : ಶ್ರೀ ಎನ್.ಎಸ್.ಬೋಸ್‌ರಾಜು (ವಿಧಾನಸಭಾ ಕ್ಷೇತ್ರದಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 09.03.2020

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಸಚಿವರು

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ರಾಯಚೂರು ನಗರದಲ್ಲಿ ಇರುವ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಕಟ್ಟಡ ನಿರ್ಮಾಣದ ಕಾಮಗಾರಿ ಪೂರೈಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಸದರಿ ಕಾಮಗಾರಿಗೆ ಖರ್ಚು ಮಾಡಿರುವ ಅನುದಾನ ಎಷ್ಟು; ಕಾಮಗಾರಿ ಪೂರ್ಣಗೊಂಡಲ್ಲಿ ಕಾಲೇಜಿಗೆ ಹಸ್ತಾಂತರಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು;</td><td>ರಾಯಚೂರು ನಗರದಲ್ಲಿ ಇರುವ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಕಟ್ಟಡ ನಿರ್ಮಾಣದ ಕಾಮಗಾರಿಗೆ 2015-16ನೇ ಸಾಲಿನಿಂದ ಇಲ್ಲಿಯವರೆಗೆ ಈ ಕೆಳಕಂಡಂತೆ ಅನುದಾನ ಬಿಡುಗಡೆ ಮಾಡಲಾಗಿದೆ.<br>(ರೂ. ಲಕ್ಷಗಳಲ್ಲಿ)<br><table><tr><th>ಅಂದಾಜು ಮೊತ್ತ</th><th>ಟೆಂಡರ್ ಮೊತ್ತ</th><th>ವಿ.ಟಿ.ಯು ಯಿಂದ ಬಿಡುಗಡೆ</th><th>ಇಲಾಖೆ ಯಿಂದ ಬಿಡುಗಡೆ</th><th>ಒಟ್ಟು ಬಿಡುಗಡೆ</th><th>ಬಾಕಿ ಬಿಡುಗಡೆ</th></tr><tr><td>2229.00</td><td>2531.03</td><td>1000.00</td><td>1531.00</td><td>2531.00</td><td>0.00</td></tr></table><br>ಪ್ರಸ್ತುತ ಕಾಮಗಾರಿಯು ಮುಕ್ತಾಯಗೊಂಡಿದ್ದು, ನೂತನ ಕಟ್ಟಡಕ್ಕೆ ಸಂಸ್ಥೆಯನ್ನು ಸ್ಥಳಾಂತರಿಸಿದ್ದು, ತರಗತಿಗಳು ನೂತನ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿವೆ. ಇತರೆ ಅಗತ್ಯ ಕಾಮಗಾರಿಗಳು ಪೂರ್ಣಗೊಂಡ ನಂತರ ಶೀಘ್ರದಲ್ಲಿ ಕಟ್ಟಡವನ್ನು ಹಸ್ತಾಂತರಿಸಿಕೊಳ್ಳಲು ಕ್ರಮ ವಹಿಸಲಾಗುವುದು.</td></tr>
<tr><td>(ಆ)</td><td>ರಾಯಚೂರು ನಗರದಲ್ಲಿರುವ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜಿನಲ್ಲಿ ಮೂಲ ಸೌಕರ್ಯಗಳನ್ನು ಒದಗಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು;</td><td>ಸರ್ಕಾರಿ ಪಾಲಿಟೆಕ್ನಿಕ್, ರಾಯಚೂರು ಸಂಸ್ಥೆಗೆ ಈ ಕೆಳಕಂಡ ಮೂಲಭೂತ ಸೌಲಭ್ಯಗಳನ್ನು ಒದಗಿಸಲಾಗಿದೆ.<br>1. ಕೇಂದ್ರ ಸರ್ಕಾರದ ಧನಸಹಾಯ ಯೋಜನೆಯಡಿ ಅಂದಾಜು ಮೊತ್ತ ರೂ.100.00 ಲಕ್ಷಗಳಲ್ಲಿ ಮಹಿಳಾ ಹಾಸ್ಟೆಲ್ ನಿರ್ಮಾಣ.<br>2. ಎಸ್.ಸಿ.ಎಸ್.ಪಿ./ಟಿ.ಎಸ್.ಪಿ ಯೋಜನೆಯಡಿ ಅಂದಾಜು ಮೊತ್ತ ರೂ.100.00 ಲಕ್ಷಗಳಲ್ಲಿ ಹಾಸ್ಟೆಲ್ ನಿರ್ಮಾಣ.<br>3. ಸಂಸ್ಥೆಯ ಕಾಂಪೌಂಡ್ ಗೋಡೆ ನಿರ್ಮಾಣ, ಸಿಬ್ಬಂದಿಯವರ ವಸತಿ ಗೃಹಗಳ ದುರಸ್ತಿ ಕಾಮಗಾರಿ ಹಾಗೂ ಸಂಸ್ಥೆಯ ಕಟ್ಟಡ ಮತ್ತು ಪ್ರಿನ್ಸಿಪಾಲರ ವಸತಿ ಗೃಹದಲ್ಲಿ ದುರಸ್ತಿ ಕಾಮಗಾರಿಗಳಿಗೆ ಒಟ್ಟು ರೂ.57.94 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br>4. 2019-20 ನೇ ಸಾಲಿಗೆ ಎಸ್.ಸಿ.ಎಸ್.ಪಿ./ಟಿ.ಎಸ್.ಪಿ ಯೋಜನೆಯಡಿ ಹಾಸ್ಟೆಲ್ ಕಟ್ಟಡಲ್ಲಿ ಹೆಚ್ಚುವರಿ ಕೊಠಡಿ ನಿರ್ಮಾಣ ಕಾಮಗಾರಿಗೆ ಅಂದಾಜು ಮೊತ್ತ ರೂ.90.00 ಲಕ್ಷಗಳಿಗೆ ಅನುಮೋದನೆ ನೀಡಿ, ರೂ.67.39 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br>5. ಸರ್ಕಾರದ ಆದೇಶ ಸಂಖ್ಯೆ: ಇಡಿ 7 ಹೆಚ್‌ಪಿಟಿ 2020 ದಿ: 04-03-2020 ರಲ್ಲಿ ವಿವಿಧ ಅಭಿವೃದ್ಧಿ ಕಾಮಗಾರಿಗಳು 2019-20ನೇ ಸಾಲಿಗೆ ಅಂದಾಜು ಮೊತ್ತ ರೂ.50.00 ಲಕ್ಷಗಳಲ್ಲಿ ಕೈಗೊಳ್ಳಲು ಕ್ರಿಯಾ ಯೋಜನೆ ಅನುಮೋದನೆಯಾಗಿದೆ.</td></tr>
</table>

| | | |
|---|---|---|
| (ಇ) | ಕೇಂದ್ರ ಸರ್ಕಾರದ ನೀತಿ ಆಯೋಗ ಯೋಜನೆಯಡಿಯಲ್ಲಿ (Aspirational) ಮಹತ್ವಾಕಾಂಕ್ಷೆಯ ಜಿಲ್ಲೆಯಾಗಿ ಗುರುತಿಸಿಕೊಂಡಿರುವ ರಾಯಚೂರು ಜಿಲ್ಲೆಯಲ್ಲಿ ಶಿಕ್ಷಣ ಉತ್ತೇಜಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರೂಸಾ ಅಡಿಯಲ್ಲಿ ರಾಯಚೂರು ಜಿಲ್ಲೆಯ ಸಿದ್ಧರಾಮಪುರದಲ್ಲಿ ರೂ.12.00 ಕೋಟಿಗಳ ಅಂದಾಜಿನಲ್ಲಿ ಸರ್ಕಾರಿ ಮಾದರಿ ಪದವಿ ಕಾಲೇಜನ್ನು ನಿರ್ಮಿಸಲು ಆಡಳಿತಾತ್ಮಕ ಅನುಮೋದನೆ ನೀಡಿದೆ. |
| (ಈ) | ರಾಯಚೂರು ಜಿಲ್ಲೆಗೆ ಇಲ್ಲಿಯವರೆವಿಗೂ ಸಿಕ್ಕಿರುವ ಸೌಕರ್ಯಗಳೇನು; ಈ ಯೋಜನೆಯಿಂದ ಬಿಡುಗಡೆಯಾದ ಅನುದಾನ ಎಷ್ಟು? | ಮೇಲಿನಂತೆ |

ಕಡತ ಸಂಖ್ಯೆ: ಇಡಿ 30 ಹೆಚ್‌ಪಿಟಿ 2020

**(ಡಾ: ಅಶ್ವಥ್ ನಾರಾಯಣ ಸಿ.ಎನ್)**
ಉಪ ಮುಖ್ಯಮಂತ್ರಿಗಳು ಹಾಗೂ
ಉನ್ನತ ಶಿಕ್ಷಣ ಸಚಿವರು